ಡಿಸೆಂಬರ್ 2019

WCG
Wildlife Conservation Group

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಶಶಿಧರಸ್ವಾಮಿ ಆರ್. ಹಿರೇಮಠ

**ಪರಿಷ್ಕರಣೆ**

ಮುರಳಿ ಎಸ್.

ಅನನ್ಯರೂಪ

**ಕರಡು ತಿದ್ದುಪಡಿ**

ಡಾ.ದೀಪಕ್ ಬಿ., ಮೈಸೂರು




© ವಿಜಯ್ ಕುಮಾರ್ ಡಿ. ಎಸ್.

# ಕೆಂಪು ಗೊರಟೆ

ವೈಜ್ಞಾನಿಕ ಹೆಸರು : ***Barleria mysorenasis***



© ಅಶ್ವಥ ಕೆ.ಎನ್.　　ಕೆಂಪು ಗೊರಟೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಕೆಂಪು ಗೊರಟೆ ಇದೊಂದು 5 ರಿಂದ 6 ಅಡಿ ಎತ್ತರಕ್ಕೆ ಬೆಳೆಯುವ ಪೊದೆ ಸಸ್ಯವಾಗಿದ್ದು, ದಕ್ಷಿಣ ಭಾರತ ಹಾಗೂ ಶ್ರೀಲಂಕಾದಲ್ಲಿ ಕಂಡು ಬರುವ ಈ ಸಸ್ಯವು 8 ರಿಂದ 16 ಮಿ.ಮೀ ಉದ್ದದ ಎಲೆಗಳನ್ನು ಹೊಂದಿದ್ದು ಅವುಗಳ ಎರಡು ಭಾಗ ಸಣ್ಣಸಣ್ಣ ಕೂದಲಿನಂತಾ ಮುಳ್ಳುಗಳ ಆಕಾರದ ಜೊತೆಗ ಎಲೆಯ ಕೆಳಭಾಗದಲ್ಲಿ ಗಟ್ಟಿಯಾದ ಮುಳ್ಳುಗಳನ್ನ ಹೊಂದಿರುತ್ತವೆ. ವರ್ಷದ ನವೆಂಬರ್ ನಿಂದ ಏಪ್ರಿಲ್ ತನಕ ಕೆನ್ನೇರಳೆ ತಿಳಿ ನೀಲಿ ಬಣ್ಣದ ಹೂಗಳನ್ನು ಬಿಡುತ್ತವೆ. ಭಾರತ ಹಾಗೂ ಶ್ರೀಲಂಕಾ ಗಳಲ್ಲಿ ಈ ಸಸ್ಯವನ್ನು ಔಷಧಿ ಸಸ್ಯವಾಗಿಯೂ ಬಳಸುತ್ತಾರೆ.

# ಮಯೂರ ನರ್ತನ




ನಾಗರಹೊಳೆ ಹುಲಿ ಯೋಜನೆಯ ರಾಷ್ಟ್ರೀಯ ಉದ್ಯಾನವನದ ದಮ್ಮನಕಟ್ಟೆ ವಲಯದ ಕಾಡಿನಲ್ಲಿ ವನ್ಯಜೀವಿ ಛಾಯಾಗ್ರಹಣಕ್ಕಾಗಿ ಅರಣ್ಯ ಇಲಾಖೆಯ ವಾಹನದಲ್ಲಿ ನಾವು ಸಾಗುತ್ತಿದ್ದೆವು. ಶುಭ್ರವಾದ ನೀಲಾಕಾಶ, ಆಗ ತಾನೇ ಉದಯಿಸಿದ ಭಾಸ್ಕರನಿಂದ ಖಗ-ಮೃಗಗಳು ಚಟುವಟಿಕೆ ಪ್ರಾರಂಭಿಸಿದ್ದವು. ನವಿಲುಗಳು ಮೇ-ಆವ್... ಮೇ-ಆವ್... ಮೇ-ಆವ್... ಎಂದು ಕಾಡೆಲ್ಲ ಮಾರ್ಧನಿಸುವಂತೆ ಕೂಗುತ್ತಿದ್ದವು. ಇದ್ದಕ್ಕಿದ್ದಂತೆ ಕಪ್ಪನೆಯ ಹೆಪ್ಪುಗಟ್ಟಿದ ಕಾರ್ಮೋಡಗಳು ತೇಲಲಾರಂಭಿಸಿ ಮಳೆ ಬರುವ ಮುನ್ಸೂಚನೆ ನೀಡಿತು. ವಾಹನ ನಿಧಾನವಾಗಿ ಚಲಿಸುತ್ತಿತ್ತು. ಸ್ವಲ್ಪ ದೂರದಲ್ಲಿ ಪೊದೆಯ ಮುಂದೆ ಗಂಡು ನವಿಲೊಂದು ನಾಟ್ಯವಾಡುವ ದೃಶ್ಯ ಕಂಡ ತಕ್ಷಣ ಚಾಲಕನಿಗೆ ವಾಹನ ನಿಲ್ಲಿಸುವಂತೆ ಸೂಚನೆಯಿತ್ತು, ಕುಣಿಯುತ್ತಿದ್ದ ಗರಿಗಣ್ಣ ವಿಹಗನ ಛಾಯಾಚಿತ್ರಣ ಮಾಡತೊಡಗಿದೆ. ನಾಲ್ಕಾರು ಫೋಟೋ ಕ್ಲಿಕ್ಕಿಸುತ್ತಿದ್ದ ಹಾಗೇ ಅಲ್ಲಿಗೆ ನೀಲವೇಣಿಯೂ (ಹೆಣ್ಣು ನವಿಲು) ಬಂದಳು.

ಹೆಣ್ಣು ನವಿಲಿನೊಂದಿಗೆ ಮಿಲನ ಕೂಟಕ್ಕೆ ತವಕಿಸುವ ಗಂಡು ನವಿಲು ಆಕಾಶದಲ್ಲಿ ಕಾರ್ಮೋಡಗಳು ತೇಲಿದಾಗ, ಇಲ್ಲವೇ ಮಳೆ ಬರುವ ಮುನ್ಸೂಚನೆ ಸಿಕ್ಕಾಗ, ಮಳೆ ಬಾರದಿದ್ದರೂ ಗಂಡು ನವಿಲುಗಳು ಸಂಭ್ರಮಿಸುತ್ತ ನಾಟ್ಯವಾಡಲು ಪ್ರಾರಂಭಿಸುತ್ತವೆ. ಅವು ನೃತ್ಯ ಮಾಡುವಾಗ ತಮ್ಮ ಗರಿಗಳು ಒಂದಕ್ಕೊಂದು ಬಡಿದು ಮಳೆಹನಿ ಧರೆಗೆ ಸಿಂಚನಗೈಯುವ ಮುಸಲಧಾರೆ ಹನಿಗಳು ಬಿದ್ದ ಸಪ್ಪಳದಂತೆ ಭಾಸವಾಗುತ್ತದೆ.

ಇದು ಹೆಣ್ಣು ನವಿಲಿಗೆ ಮುಸಲಧಾರೆ ಬಿತ್ತೆಂದು ನಂಬಿಸಿ ಮಿಲನ ಕೂಟಕ್ಕೆ ಆಕರ್ಷಿಸುವ ಮೋಹಕ ನಾಟ್ಯರೂಪಕವಾಗಿದೆ.


© ಶಶಿಧರಸ್ವಾಮಿ ಆರ್. ಹಿರೇಮಠ

ಸಂತಾನಾಭಿವೃದ್ಧಿಯಲ್ಲಿ ಗಂಡಿಗೆ ಸಹಜವಾಗಿ ಅವಸರ ಹೆಚ್ಚು. ಆದರೆ ಹೆಣ್ಣು ನವಿಲು ಪ್ರಸ್ತುತ ಸನ್ನಿವೇಶ ಸಂದರ್ಭಗಳನ್ನು ಅಂದರೆ ನಿಸರ್ಗದಲ್ಲಿ ಮುಂಬರುವ ನವಜಾತ ಮರಿಗಳಿಗೆ ಆಹಾರದ ಲಭ್ಯತೆಯನ್ನು ಅರಿತು ಸಂತಾನಾಭಿವೃದ್ಧಿಯಲ್ಲಿ ತೊಡಗುತ್ತವೆ. ನವಿಲು ಜಾತಿಯ ಗಂಡು-ಹೆಣ್ಣುಗಳು ಮಿಲನಗೊಳ್ಳದೆ ಮೊಟ್ಟೆಗಳನ್ನಿಡುತ್ತವೆ, ಅದಕ್ಕಾಗಿ ಇವಕ್ಕೆ "ಪಾಪವಿಲ್ಲದ ಪಿಂಡ"ದ ಪಕ್ಷಿಗಳು ಎನ್ನುತ್ತಾರೆ ಎಂದು ನಮ್ಮ ಹಿರೀಕರಲ್ಲಿ ನಂಬಿಕೆ ಇದೆ. ಅವರು ಹೇಳುವಂತೆ ಗಂಡು ನವಿಲು ನೃತ್ಯ ಮಾಡುತ್ತಾ ಕಾಲನ್ನು ನೋಡಿಕೊಳ್ಳುತ್ತವೆ. ನಾನು ಎಷ್ಟು ಸುರಸುಂದರಾಂಗನಾಗಿರುವೆ, ಆದರೆ ನನ್ನ ಕಾಲುಗಳು ಸುಂದರವಾಗಿಲ್ಲವೆಂದು ಕಣ್ಣೀರಿಡುತ್ತದೆ. ನೆಲಕ್ಕೆ ಬಿದ್ದ ಆ ಕಣ್ಣೀರ ಹನಿಗಳನ್ನು ಹೆಣ್ಣು ನವಿಲು ಹೆಕ್ಕಿ ಕುಡಿದು ಗರ್ಭಧರಿಸುತ್ತದೆ ಎಂದು ನಂಬಿದ್ದಾರೆ. ಈ ಸನ್ನಿವೇಶದಲ್ಲಿ ಹೆಣ್ಣು ನವಿಲು ನೆಲದಲ್ಲಿ ಹೆಕ್ಕಿ ಕುಡಿಯುವುದು ಗಂಡಿನ ಕಣ್ಣೀರನ್ನಲ್ಲ ಬದಲಿಗೆ ಗಂಡು ನೃತ್ಯ ಮಾಡುತ್ತಾ ಹೆಣ್ಣಿಗಾಗಿ ನೆಲದಲ್ಲಿ ಬಿದ್ದ ಎಲೆ, ಕಡ್ಡಿಕಸಗಳನ್ನು ಕೆದರಿ ಹುಳು-ಹುಪ್ಪಟೆಗಳು ಮೇಲೆ ಬರುವಂತೆ ಮಾಡಿ "ಮಿಲನದೂಟ" (ಮಧುಚಂದ್ರ ರಾತ್ರಿಯಲ್ಲಿ ಹಣ್ಣು-ಹಂಪಲು, ಸಿಹಿ ಖಾದ್ಯಗಳನ್ನು ತಿನ್ನಲು ಇಡುವಂತೆ) ನೀಡುವಂತೆ ಮಾಡುತ್ತದೆ. ಆಗ ಅಲ್ಲಿಗೆ ಬಂದ ಹೆಣ್ಣು ನವಿಲು ಆ ಕೀಟ, ಹುಳು-ಹುಪ್ಪಟೆ ಗಳನ್ನು ಹೆಕ್ಕಿತಿನ್ನುವುದನ್ನು ನೋಡಿ ಕಣ್ಣೀರು ಕುಡಿಯುತ್ತವೆ ಎಂದು ತಪ್ಪಾಗಿ ಭಾವಿಸಿದ್ದಾರೆ.

ನವಿಲುಗಳನ್ನು ಪಕ್ಷಿಶಾಸ್ತ್ರೀಯವಾಗಿ 'ಪಾವೋ ಕ್ರಿಸ್ಟಟಸ್' ( Pavo cristatus) ಎಂದು ಹೆಸರಿಸಿ 'ಗ್ಯಾಲಿಫಾರ್ಮಿಸ್' (Galliformes) ಗಣದ 'ಫಸಿಯಾನಿಡೇ' (Phasianidae) ಕುಟುಂಬಕ್ಕೆ ಸೇರಿಸಲಾಗಿದೆ. ಸಂಸ್ಕೃತದಲ್ಲಿ ಶಿಖಿ, ಮಯೂರ ಎಂಬ ಹೆಸರುಗಳಿವೆ. ತುಳುವಿನಲ್ಲಿ ನವಿಲ್ ಎಂದು, ಬೆಟ್ಟಕುರುಬರು ಮೀಲ ಎಂದು, ಕೊಡವರು ಮೈಲ್ ಎಂದು, ಹಕ್ಕಿಪಿಕ್ಕಿಗಳು ದಿಗಾಡೊ ಎಂದು ಕರೆಯುತ್ತಾರೆ. ಕನಕದಾಸರು ತಮ್ಮ ಕಾವ್ಯಗಳಲ್ಲಿ ನವಿಲ, ನೀಲಕಂಠ, ಮಯೂರ, ರೋಮಾಕ್ಷ, ಗರಿಗಣ್ಣವಿಹಗ, ನೀಲವೇಣಿ, ಮೋರ, ಶಿಖಿ, ನೀಲಕಂಧರ, ಷಣ್ಮುಖವಾಹನ ಎಂದೆಲ್ಲಾ ಉಲ್ಲೇಖಿಸಿದ್ದಾರೆ. ಕನಕದಾಸರ ಮೋಹನತರಂಗಿಣಿ ಕಾವ್ಯದ ಒಂದು ಸಾಂಗತ್ಯದಲ್ಲಿ

ನತ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ

ತೆತ್ತೀಸ ಕೋಟಿ ನಿರ್ಜರರು

ಮುತ್ತಿನ ತ್ಯಾಗವ ಕೊಟ್ಟಂತೆ ಆಲಿಕಲ್

ಬಿತ್ತುದುರಿದವು ಉರ್ವಿಯಲಿ (4-38)

ಇದರ ಭಾವಾರ್ಥವು ನರ್ತಿಸುವ ನವಿಲ ನಾಟ್ಯಕ್ಕೆ ಮೆಚ್ಚಿ ಇಂದ್ರ ಹಾಗೂ ಮೂವತ್ತು ಮೂರು ಕೋಟಿ ದೇವತೆಗಳು ಮುತ್ತುಗಳ ದಾನ ನೀಡಿದಂತೆ ಆಲಿಕಲ್ಲು ಬಿತ್ತ?ಬೀಜ ಭೂಮಿಗೆ ಉದುರಿದವು ಎಂದಾಗಿದೆ.


© ಶಶಿಧರಸ್ವಾಮಿ ಆರ್. ಹಿರೇಮಠ

ಇದು ಸುಮಾರು 110 ಸೆಂ.ಮೀ ಉದ್ದವಾದ ದೊಡ್ಡ ಗಾತ್ರದ ಹಸಿರು ಮಿಶ್ರಿತ ನೀಲ ವರ್ಣ ಸುಂದರ ಪಕ್ಷಿ. ಗಂಡು-ಹೆಣ್ಣುಗಳ ದೇಹ ಲಕ್ಷಣಗಳಲ್ಲಿ ವ್ಯತ್ಯಾಸವಿದ್ದು, ಗಂಡು ಹಕ್ಕಿಯು ಹೊಳೆಯುವ ಹಸಿರು ಮಿಶ್ರಿತ ಕಡು ನೀಲ ವರ್ಣದಿಂದ ಕೂಡಿದೆ. ನೆತ್ತಿಯ ಮೇಲೆ ಶಿಖೆ (ಕುಚ್ಚ) ಇದೆ. ಬಲಿಷ್ಠ ತಿಳಿ ಹಳದಿ ಕೊಕ್ಕು, ಕಣ್ಣಿನ ಸುತ್ತ ಬಿಳಿ ಪಟ್ಟಿ ಇದೆ. ಪಕ್ಕೆ ಭಾಗದ ಪುಕ್ಕಗಳು ತಿಳಿ ಕಂದು ಬಣ್ಣದವು. ಉದ್ದವಾದ ವರ್ಣಮಯ ಚಿತ್ತಾಕರ್ಷಕ ಬಾಲವಿದೆ. ಬಾಲದ ಗರಿಗಳಲ್ಲಿ ಕಣ್ಣಿನಂತಿರುವ ಆಕೃತಿಗಳಿವೆ. ಇವು ಗರಿಗಳನ್ನು ಅಗಲಿಸಿ ನಾಟ್ಯ ಮಾಡುವಾಗ ಸ್ಪಷ್ಟವಾಗಿ ಗೋಚರಿಸುತ್ತವೆ. ಕಾಲುಗಳು ತಿಳಿ ಹಳದಿ ಬಣ್ಣದವು. ಹೆಣ್ಣು ಹಕ್ಕಿಗೆ ಮಿರುಗುವ ಪಾಚಿ ಹಸಿರು ಕತ್ತು, ಬೂದು ರೆಕ್ಕೆಗಳು ಮತ್ತು ಮೋಟು ಬಾಲವಿದೆ.


© ಶಶಿಧರಸ್ವಾಮಿ ಆರ್. ಹಿರೇಮಠ

ನವಿಲುಗಳು "ಬಹುಪತ್ನಿತ್ವ"ದ (Polygamy)" ಹಕ್ಕಿಗಳಾಗಿವೆ. ಗಂಡು ನವಿಲು ಅನೇಕ ಹೆಣ್ಣು ನವಿಲುಗಳೊಂದಿಗೆ ಪ್ರಣಯಗೊಳ್ಳುತ್ತದೆ. ನವಿಲುಗಳು ಪರ್ಣಪಾತಿ ಕಾಡು, ಕುರುಚಲು ಕಾಡು, ಮೈದಾನ ಪ್ರದೇಶ, ತೋಟ, ನೆಡುತೋಪು, ವ್ಯವಸಾಯ ಭೂಮಿ, ಹಳ್ಳಿಗಳ ಊರಿನ ಬಳಿ, ನದಿ ಸರೋವರಗಳ ಪಕ್ಕ, ಬಂಡೆ ಪ್ರದೇಶಗಳ ನೆಲ ಅಥವಾ ಮರಗಳಲ್ಲಿ ಗುಂಪಾಗಿ ವಾಸಿಸುತ್ತವೆ. ಮೇ-ಆವ್... ಮೇ-ಆವ್... ಮೇ-ಆವ್... ಎಂದು ಮಾರ್ದನಿಸುವಂತೆ ಕೂಗುತ್ತವೆ. ನಸುಕಿನ ಜಾವದಲ್ಲಿಯೂ ಕೂಗುವುದು ಉಂಟು. ರಾತ್ರಿ ಸಮಯದಲ್ಲಿ ಎತ್ತರದ ಮರಗಳಲ್ಲಿ ನವಿಲುಗಳು ತಂಗುತ್ತವೆ. ನವಿಲು ನಮ್ಮ ಪುರಾಣಗಳಲ್ಲಿ, ಪ್ರಾಚೀನ ಸಾಹಿತ್ಯದಲ್ಲಿ, ಚಿತ್ರಕಲೆ, ಶಿಲ್ಪಕಲೆಗಳಲ್ಲಿ ಹಾಸು ಹೊಕ್ಕಾಗಿದೆ. ಮೌರ್ಯರು ನವಿಲನ್ನು ತಮ್ಮ ರಾಜಮನೆತನದ ಲಾಂಛನ ಮಾಡಿಕೊಂಡಿದ್ದರು. ಇದು ಷಣ್ಮುಖಸ್ವಾಮಿಯ ವಾಹನವೆಂದು ಹಿಂದೂ ಪುರಾಣದಲ್ಲಿ ಉಲ್ಲೇಖಿಸಲಾಗಿದೆ. 1962ರಲ್ಲಿ ಭಾರತ ಸರ್ಕಾರವು ಇದನ್ನು ರಾಷ್ಟ್ರಪಕ್ಷಿ ಎಂದು ಘೋಷಿಸಿದೆ.




ನವಿಲುಗಳ ಸಂತಾನೋತ್ಪತ್ತಿ ಸಮಯವು ಜನವರಿ-ಅಕ್ಟೋಬರ್ ತಿಂಗಳಾಗಿದೆ. ಈ ಸಮಯದಲ್ಲಿ ಪೊದೆ ಇರುವ ನೆಲದಲ್ಲಿ ಸ್ವಲ್ಪ ಗುಳಿ ಮಾಡಿ ಒಣ ಎಲೆ, ಹುಲ್ಲು, ಕಡ್ಡಿಗಳನ್ನು ಹರಡಿ ಗೂಡು ಕಟ್ಟಿ 4 ರಿಂದ 7 ಕೆನೆ ವರ್ಣದ ಮೊಟ್ಟೆಗಳನ್ನು ಇಟ್ಟು, ಸುಮಾರು 27 ರಿಂದ 29 ದಿನಗಳವರೆಗೆ ಕಾವು ನೀಡಿ ಮರಿ ಮಾಡುತ್ತದೆ. ಮೊಟ್ಟೆಗಳಿಗೆ ಕಾವು ಕೊಡುವ ನವಿಲುಗಳು ಮೊಟ್ಟೆಯ ಸುತ್ತ ಮುತ್ತಲೂ ಓಡಾಡಿಕೊಂಡಿರುತ್ತವೆ. ಹಾವು, ನರಿಗಳು ಮೊಟ್ಟೆಗಳನ್ನು ಕಬಳಿಸುವ ಶತ್ರುಗಳಾಗಿದ್ದು, ಶತ್ರುಗಳನ್ನು ದೂರದಿಂದ ತಮ್ಮ ತೀಕ್ಷ್ಣದೃಷ್ಟಿಯಿಂದ ಗುರುತಿಸಿ, ಶತ್ರುವಿನ ನೋಟವನ್ನು ತಮ್ಮತ್ತ ಸೆಳೆಯುವಂತೆ ಮಾಡಿ ಆಗುವ ಅಪಾಯವನ್ನು ತಪ್ಪಿಸಿ ಮೊಟ್ಟೆಗಳನ್ನು ರಕ್ಷಿಸಿಕೊಳ್ಳುತ್ತವೆ. ಇವುಗಳು ಸುಮಾರು 20 ವರ್ಷಗಳ ಕಾಲ ಜೀವಿಸಬಲ್ಲವು. ನವಿಲುಗಳು ಮಿಶ್ರಾಹಾರಿಗಳಾಗಿವೆ. ಮುಖ್ಯವಾಗಿ ಹಾವು, ಹಲ್ಲಿ, ಕೀಟ, ಹುಪ್ಪಡಿ, ಕಾಳು, ಬೀಜಗಳನ್ನು ತಿನ್ನುತ್ತವೆ.

ಸಂತಾನಾಭಿವೃದ್ಧಿಗಾಗಿಯೇ ಹುಟ್ಟಿರುವ ಬಾಲದ ಗರಿಯನ್ನು ಗಂಡು ನವಿಲುಗಳು ಹೊತ್ತುಕೊಂಡು ಮಳೆಗಾಲದಲ್ಲಿ ತಿರುಗಾಡುವುದು ಕಷ್ಟದ ಕೆಲಸ. ಹಾಗಾಗಿ ಮಳೆಗಾಲ ಶುರುವಾಗಿ ಪ್ರಣಯಕೂಟಗಳು ಮುಗಿದಾದ ಮೇಲೆ ಮಧ್ಯ ಮಳೆಗಾಲದ ಹೊತ್ತಿಗೆ ಗರಿಗಳನ್ನು ತಾವೇ ಕಿತ್ತುಕೊಂಡು ಮೊಟು ಬಾಲ ಮಾಡಿಕೊಂಡು ಹೆಣ್ಣು ನವಿಲಿನಂತೆ ಓಡಾಡುತ್ತಿರುತ್ತವೆ.

ಅಲ್ಲಿಗೆ ಬಂದ ಹೆಣ್ಣು ನವಿಲು ಅತ್ತಿಂದಿತ್ತ ಗಂಡನ್ನು ಸುತ್ತು ಹಾಕಿ ತನ್ನ ಎದೆಯನ್ನು ಉಬ್ಬಿಸಿ ಅತ್ತ-ಇತ್ತ ಒಮ್ಮೆ ನೋಡಿ ತಾನೂ ಮಿಲನಕ್ಕೆ ಸಿದ್ಧವಿದ್ದೇನೆಂದು ಸಮ್ಮತಿ ಸೂಚಿಸುವಂತೆ ತನ್ನ ಮೋಟು ಬಾಲದ ಗರಿಯನ್ನು ಅರಳಿಸಿ ನಿಂತಿತು. (New scenario stars suddenly)




ಅವು ಈಗ ಪ್ರಣಯದಾಟದ ಕೂಟಕ್ಕೆ ಉತ್ಸುಕತೆಯಲ್ಲಿದ್ದಂತೆ ಭಾಸವಾಗುತ್ತಿತ್ತು. ಕಾಡಿನ ಭೂರಮೆಯ ಹಚ್ಚ ಹಸಿರು, ಹಿಂಬದಿಯಲ್ಲಿರುವ ಪೊದೆ, ಆಕಾಶದಲ್ಲಿ ತೇಲುವ ಕಾರ್ಮೋಡಗಳ ಶೃಂಗಾರವನ್ನು ನೋಡಿ ಮೋರ-ಮೋರಿಣಿಯರು ಹಿಗ್ಗಿದರು. ಗಂಡು ನವಿಲು ಒಂದೊಂದೆ ಹೆಜ್ಜೆ ಇಡುತ್ತ ತನ್ನ ಅರಳಿದ ಗರಿಗಳ ಗುಚ್ಛವನ್ನು ಹೊತ್ತು ಹೆಣ್ಣುನವಿಲ ಸನಿಹಕ್ಕೆ ಬಂದು, ತನ್ನ ಕೊರಳು ಎತ್ತಿ ಹೆಣ್ಣು ನವಿಲನ್ನು ದೃಷ್ಟಿಸಿ ನೋಡಿ ಇನ್ನೂ ಸನಿಹಕೆ ಬಂದು, ಅದರ ತಲೆಯನ್ನು ತನ್ನ ಬಾಗಿದ ನುಣುಪಿನ ಕೊಕ್ಕಿನಿಂದ ಹಿಡಿದನು ಕುಕ್ಕಿದನು...

ನಾಟ್ಯಕ್ಕಾಗಿ ತೆರೆದ ಗರಿ ಸಮೂಹ ಅರಳಿ ಹಾಗೇ ಇತ್ತು. ಅದರಲ್ಲಿನ ಸಾವಿರಕಣ್ಣುಗಳು ಉಲ್ಲಾಸಗೊಂಡಂತೆ ಭಾಸವಾಯಿತು. ನವಿಲುಗಳ ಸಂಯೋಜನೆ ಕಂಬಕ್ಕೆ ಹಬ್ಬಿದ ಲತೆಯಂತೆ ಗೋಚರಿಸಿ ಪ್ರಕೃತಿಯು ಚಿತ್ತಾರ ಬಿಡಿಸಿದಂತೆ ಕಂಡು ಬಂದಿತು.

ಎಲ್ಲ ದೃಶ್ಯಗಳು ನನ್ನ ಕ್ಯಾಮರಾದಲ್ಲಿ ಸೆರೆಯಾದವು. ಅದ್ಭುತ ಅವರ್ಣನಾತೀತ ಸನ್ನಿವೇಶವನ್ನು ಕಣ್, ಮನ, ಕ್ಯಾಮರಾಗಳಲ್ಲಿ ತುಂಬಿಕೊಂಡು, ಮಳೆ ಹನಿಗಳು ಬೀಳಲಾರಂಭಿಸಿದಾಗ ಕಾಡಿನಿಂದ ಮರಳಿದೆವು.



















**- ಶಶಿಧರಸ್ವಾಮಿ ಆರ್. ಹಿರೇಮಠ**

ಕದರಮಂಡಲಗಿ, ಹಾವೇರಿ ಜಿಲ್ಲೆ


© ಅರವಿಂದ ರಂಗನಾಥ್

# ನವಚೇತನ

ಪ್ರತೀ ವರ್ಷದಂತೆ ಕಳೆದ ಜುಲೈ ತಿಂಗಳಿನಲ್ಲೂ ಮಳೆ ಚೆನ್ನಾಗಿ ಬರುತ್ತಿತ್ತು. ಸರೀಸೃಪಗಳು ಹಾಗೂ ಉಭಯವಾಸಿಗಳನ್ನು ನೋಡಲು ಇದು ಉತ್ತಮ ಸಮಯವೆಂದು ನಿರ್ಧರಿಸಿ, ನಾವು ಪ್ರಪಂಚದಲ್ಲೇ ವಿಷಕಾರಿಯೆಂದು ಹೆಸರು ಮಾಡಿರುವ ಕಾಳಿಂಗಸರ್ಪಗಳ ತಾಣವಾದ ಆಗುಂಬೆಗೆ ಹೋಗಲು ನಿರ್ಧರಿಸಿದೆವು. ನಾವು ಆಗುಂಬೆ ತಲುಪಿದ ಸಂಜೆಯಲ್ಲಿ ಮಳೆ ಬೀಳುತ್ತಿತ್ತು. ಭಾರತದಲ್ಲಿ ಹೆಚ್ಚು ಮಳೆಯಾಗುವ ಎರಡನೇ ಸ್ಥಳವಾದ ಆಗುಂಬೆ ಪಶ್ಚಿಮಘಟ್ಟಗಳಲ್ಲಿ ಹರಡಿಕೊಂಡಿದೆ. ಮಳೆಬರುತ್ತಿರುವಾಗ ಸರೀಸೃಪಗಳು ಹಾಗೂ ಉಭಯಚರಿಗಳ ಚಟುವಟಿಕೆ ಹೆಚ್ಚಿರುತ್ತಾದ್ದರಿಂದ ಅವು ಕಾಣುವ ಸಂಭವವೂ ಹೆಚ್ಚು, ಆ ಕಾರಣ ನಾವು ಸಮಯವನ್ನು ವ್ಯಯಿಸದೆ ಆಗುಂಬೆ ತಲುಪಿದಕೂಡಲೇ ಪರಿಚಿತ ಕಾಡನ್ನು ಹೊಕ್ಕೆವು. ನಮ್ಮ ತಂಡದಲ್ಲಿದ್ದ ಒಬ್ಬ ಮಿತ್ರ ಉಭಯವಾಸಿಗಳು ಹಾಗು ಸರೀಸೃಪಗಳ ಬಗ್ಗೆ ಆಳವಾಗಿ ತಿಳಿದುಕೊಂಡಿದ್ದ, ಅವರಿಂದ ನಮಗೆ ಹೆಚ್ಚು ಮಾಹಿತಿ ಸಿಗುವುದೆಂದು ನಮ್ಮ ಉತ್ಸಾಹ ದುಪ್ಪಟ್ಟಾಗಿತ್ತು.

ಸಂಜೆಯ ನಡಿಗೆಯಲ್ಲಿ ನೋಡಲಿಕ್ಕೆ ಹೆಚ್ಚೇನು ಕಾಣಿಸಲಿಲ್ಲ. ಗೊಂಕರು ಕಪ್ಪೆ, ರಾಬರ್ ಫ್ಲೈ, ಕಾಡು ಹಲ್ಲಿ, ನೇರಳೆ ಬಣ್ಣದ ಹವಳದ ಅಣಬೆಗಳನ್ನು ನಾವು ನೋಡಿದೆವು. ನಾನು ಭದ್ರಾ ಕಾಡಿನಲ್ಲಿ ಕಂದು ಬಣ್ಣದ ಹವಳದಣಬೆಗಳನ್ನು ಹಿಂದೆ ಕಂಡಿದ್ದೆ, ಜೊತೆಗಾರ ಮಿತ್ರರು ಇವು ಬಲು ಅಪರೂಪದ ಅಣಬೆಗಳೆಂದು ತಿಳಿಸಿಕೊಟ್ಟರು.


© ವಿಜಯ್ ಕುಮಾರ್ ಡಿ. ಎಸ್.

ಸಂಜೆ ನಡಿಗೆಯಲ್ಲಿ ಹೆಚ್ಚೇನನ್ನು ಕಾಣದನಾವು ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡನಂತರ ರಾತ್ರಿ ಏನಾದರೂ ಮಂಡಲದಹಾವು ಕಾಣಸಿಗುವುದೇ ಎಂದು ಹುಡುಕಿಕೊಂಡು ಹೊರಟೆವು. ಒಂದು ಸಣ್ಣ ತೊರೆಯ ಪಕ್ಕ ಬಹಳಷ್ಟು ಮಲೆಜಾರುಕಪ್ಪೆಗಳಿದ್ದವು. ನಾವು ಅಲ್ಲಿದ್ದ ಕಪ್ಪೆಗಳ ಮೊಟ್ಟೆಗಳನ್ನು ಹಾಗೂ ಗೊದಮೊಟ್ಟೆಗಳನ್ನು ಚಿತ್ರೀಕರಿಸಿಕೊಂಡೆವು ನಂತರ ನಾವೆಲ್ಲ ತೊರೆಯಿಂದ ಸ್ವಲ್ಪ ಮುಂದೆ ಸಾಗುತ್ತಲೂ ಮರದ ಮೇಲೆ ಮಲೆಮಂಡಲ ಹಾವನ್ನು ಕಂಡೆವು.ಅದು ಬಹುಶಃ ಕಪ್ಪೆಗಳನ್ನು ಬೇಟೆಯಾಡಲು ಅಲ್ಲಿತ್ತೋ ಏನೋ?

ನಾವು ಕಾಣ ಬಯಸಿದ್ದ ಮಂಡಲದ ಹಾವನ್ನೂ ಕಂಡಾಯಿತು, ಚಿತ್ರೀಕರಿಸುವುದೂ ಆಯಿತು, ಆದರೆ ಮನ ಇನ್ನೂ ಏನಾದರು ವಿಶಿಷ್ಟವಾದುದನ್ನು ಕಾಣಲು ಹಾತೊರೆಯುತ್ತಿತ್ತು. ಪ್ರಕೃತಿ ನಮ್ಮ ನಿರೀಕ್ಷೆಗೂ ಮೀರಿ ನಿಂಫ್ ಹಂತವನ್ನುದಾಟಿ, ಸಂಪೂರ್ಣವಾಗಿ ಬೆಳೆದು ಪ್ರಬುದ್ಧ ಹಂತವನ್ನು ತಲುಪುತ್ತಿರುವ ಸಿಕಾಡಾವನ್ನು ನಮ್ಮ ಕಣ್ಣಳಿಗೆ ಉಣಬಡಿಸಿತು. ನಾನು ಇದುವರೆಗೂ ನೋಡಿರುವ ಎಲ್ಲಾ ಬೆಳೆದ ಸಿಕಾಡಾಗಳಿಗಿಂತ ಈ ಸಿಕಾಡಾದ ಬಣ್ಣ ವಿಭಿನ್ನವಾಗಿತ್ತು.


© ವಿಜಯ್ ಕುಮಾರ್ ಡಿ. ಎಸ್.

ಸಿಕಾಡಾಗಳು Cicadoidea ಕುಟುಂಬಕ್ಕೆ ಸೇರುತ್ತವೆ ಹಾಗೂ ಅವು "ಕೀಟಗಳು". ಭೂಮಿಯ ಉಷ್ಣವಲಯದಲ್ಲಿ ಸಿಕಾಡಾಗಳು ಕಂಡು ಬರುತ್ತವೆ. ಬೆಳೆದ ಸಿಕಾಡಾಗಳು ಮರದ ಮೇಲಿದ್ದು ಅದರ ರಸವನ್ನು ಹೀರುತ್ತವೆ. ಗಂಡು ಕೀಟಗಳ ಹೊಟ್ಟೆಯಮೇಲೆ ಟಿಂಬಲ್ ಗಳಿದ್ದು ಜೋರು ಸದ್ದನ್ನು ಹೊರಡಿಸುತ್ತವೆ. ಹೆಣ್ಣು ಸಿಕಾಡಾಗಳು ಸದ್ದನ್ನು ಮಾಡುವುದಿಲ್ಲ. ಸಂತಾನೋತ್ಪತ್ತಿ ಸಮಯದಲ್ಲಿ ಹೆಣ್ಣು ಸಿಕಾಡಾಗಳು ಮರದ ಟೊಂಗೆಯನ್ನು ಸೀಳಿ ಮೊಟ್ಟೆಗಳನ್ನಿಡುತ್ತವೆ. ಮೊಟ್ಟೆಯೊಡೆದು ಹೊರಬರುವ ನಿಂಫ್.ಗಳು (ನಿಂಫ್ ಎಂದರೆ ಮೊಟ್ಟೆಯಿಂದ ಹೊರಬಂದು ಇನ್ನೂ ಬೆಳವಣಿಗೆಯಾಗುತ್ತಿರುವ ಕೀಟ, ಕೆಲವು ಸಿಕಾಡಾ ತಳಿಗಳಲ್ಲಿ ಈ ನಿಂಫ್ ಹಂತವು 17 ವರ್ಷಗಳೂ ಇರಬಹುದು) ಬೆಳೆದು ಸಿಕಾಡಾಗಳಾಗುತ್ತವೆ. ಬೆಳೆದ ಸಿಕಾಡಾಗಳ ಆಯಸ್ಸು ಸುಮಾರು 3 ವರ್ಷಗಳು. ಇವುಗಳ ಬೆಳವಣಿಗೆಯಲ್ಲಿ ಚಿಟ್ಟೆಗಳ ಬೆಳವಣಿಗೆಯಲ್ಲಿ ಕಾಣುವ ಮೊಟ್ಟೆ, ಲಾರ್ವಾ, ಪ್ಯುಪಾ, ಚಿಟ್ಟೆ ಹಂತಗಳಂತೆ ಸಂಪೂರ್ಣ ಪರಿವರ್ತನಾ ಹಂತಗಳು ಕಾಣುವುದಿಲ್ಲ, ಬದಲಿಗೆ ಮೊಟ್ಟೆಗಳು, ನಿಂಫ್ ಹಾಗೂ ಪ್ರಬುದ್ಧಹಂತ ಅಷ್ಟೇ ಇರುತ್ತದೆ. ನಿಂಫ್ ಗಳಲ್ಲಿ ರೆಕ್ಕೆ ಇರುವುದಿಲ್ಲ.

ನಿಂಫ್.ನಿಂದ ಪ್ರಬುದ್ಧಹಂತ ತಲುಪಲು ತನ್ನ ನಿಂಫ್ ಚರ್ಮದಿಂದ ಹೊರಬಂದಿರುವ ಇನ್ನೊಂದು ಸಿಕಾಡಾವನ್ನು ಕೂಡಾ ನಾವು ಕಂಡೆವು. ಅದರ ರೆಕ್ಕೆ ವರ್ಣರಂಜಿತವಾಗಿತ್ತು. ಅದರ ಕೆಲವು ಛಾಯೆಯನ್ನು ಚಿತ್ರಿಸಿಕೊಂಡು ಮರಳಿದೆವು.




ಮಾರನೆಯ ದಿನ ಅಲ್ಲೇ ಇದ್ದ ಒಂದು ಸಣ್ಣ ಜಲಪಾತಕ್ಕೆ ಹೋದೆವು. ಅಲ್ಲಿ ಕೆಲವು ಹಸಿರು ಹಾವುಗಳು ಕಂಡವು. ಇದಕ್ಕಿಂತ ಹೆಚ್ಚಿನದೇನೂ ಬೇಕೆನಿಸಲಿಲ್ಲ, ಸೃಷ್ಟಿಯ ಈ ವಿಶೇಷ ವೈಚಿತ್ರಗಳನ್ನು ನೋಡುತ್ತಿದ್ದರೆ ಹಾಗೇ ವಿಸ್ಮಿತರಾಗೇ ಇದ್ದುಬಿಡಬೇಕೆನಿಸುತ್ತದೆ . ಎರಡು ದಿನಗಳಲ್ಲಿ ಕಾಳಿಂಗ ಸರ್ಪವನ್ನು ನೋಡಲಾಗದಿದ್ದರೂ ನಾವು ಸಿಕಾಡಾದ ಇಡೀ ಜೀವನ ವೃತ್ತಾಂತವನ್ನು ಕಣ್ತುಂಬಿಕೊಂಡೆವು.




ಅನುವಾದ:- ಡಾ. ದೀಪಕ್ ಬಿ., ಮೈಸೂರು

ಮೂಲ ಲೇಖನ:- ವಿಜಯ್ ಕುಮಾರ್ ಡಿ. ಎಸ್

ವಿ. ವಿ. ಅಂಕಣ



# ದೇಹದೊಳಗೆ ಬೆಳೆದ ಗಿಡ

ನಾವು ಕಂಡಿರುವ ಹಾಗೆ ಪಾಚಿ ಬೆಳೆಯುವ ಸ್ಥಳಗಳೆಂದರೆ ನಿಂತ ನೀರಲ್ಲೋ, ಕೆರೆಯಲ್ಲೋ ಅಥವಾ ನದಿಯಲ್ಲೋ ಎನ್ನುತ್ತೇವೆ. ಇದು ನಮ್ಮ ಸಾಮಾನ್ಯ ಜ್ಞಾನ. ಆದರೆ ಇದೇ ಮಾತನ್ನು ಕೆಲವರು ವಿಜ್ಞಾನಿಗಳ ಬಳಿ ಕೇಳಿದರೆ ಅವರು ಹೀಗೆ ಹೇಳಬಹುದು, ರಕ್ತ ನಾಳಗಳಲ್ಲೋ, ನರಗಳಲ್ಲೋ ಅಥವಾ ಮೆದುಳಲ್ಲೋ ಇರಬಹುದು ಎಂದು. ಅವರ ಈ ಮಾತುಗಳು ನೂರಕ್ಕೆ ನೂರು ಭಾಗ ಒಪ್ಪುವಂತಿಲ್ಲದಿದ್ದರೂ ಮುಂದಿನ ದಿನಗಳಲ್ಲಿ ಇದೇ ನಿಜವಾದರೆ ಆಶ್ಚರ್ಯಪಡಬೇಕಾಗಿಲ್ಲ. ಏಕೆಂದರೆ ಇತ್ತೀಚೆಗಿನ ಸಂಶೋಧನೆಯೂ ಅದನ್ನೇ ಹೇಳುವಂತಿದೆ. ನಿಮ್ಮ ಊಹೆ ಸರಿಯಾಗಿಯೇ ಇದೆ. ವಿಜ್ಞಾನಿಗಳ ಈ ವಿಚಿತ್ರ ಮಾತಿಗೆ ಕಾರಣ ಇದೇ ಸಂಶೋಧನೆ. ಇಷ್ಟಕ್ಕೂ ಏನಿದು ಸಂಶೋಧನೆ? ಮೊದಲು ಅದನ್ನು ಹೇಳಿ, ಎಳೆದದ್ದು ಸಾಕು! ಎನ್ನುವ ಮುಂಚೆಯೇ ಇದೋ ಹೇಳಿಬಿಡುತ್ತೇನೆ. ಕಪ್ಪೆ ಮರಿಗಳ(ಟ್ಯಾಡ್ ಪೋಲ್) ರಕ್ತನಾಳಗಳಲ್ಲಿ ಒಂದು ರೀತಿಯ ಪಾಚಿಯನ್ನು ಬೆಳೆಸಿದ್ದಾರಂತೆ, ಇದರಿಂದ ಆಮ್ಲಜನಕ ಕಡಿಮೆ ಸಿಗುವ ನರ ಜೀವಕೋಶಗಳಿಗೆ ಅಲ್ಲಿಂದಲೇ ಅಂದರೆ ರಕ್ತನಾಳಗಳಿಂದಲೇ ಆಮ್ಲಜನಕವನ್ನು ಪೂರೈಸಬಹುದಂತೆ!

ಅದು ಸರಿ. ರಕ್ತ ನಾಳಗಳಲ್ಲಿ ಸೂಕ್ಷ್ಮ ರೋಬೋಟುಗಳನ್ನು ಕಳಿಸಿ ಶಸ್ತ್ರಚಿಕಿತ್ಸೆಗಳನ್ನು ಮಾಡಿದ್ದಾಯಿತು. ಈಗ ಇದೊಂದು ಬಾಕಿ ಇತ್ತು...ದೇಹದೊಳಗೇ ಗಿಡ ಬೆಳೆಸುವುದು!ಆದರೆ ನಾವಿದನ್ನು ನೋಡಬೇಕಾದ ದೃಷ್ಟಿಕೋನವೇ ಬೇರೆ. ಈ ಸಂಶೋಧನೆಯಿಂದ ಮುಂದೊಂದು ದಿನ ನರ ಜೀವಕೋಶಗಳಿಗೆ ಕಡಿಮೆ ಆಮ್ಲಜನಕದ ಪೂರೈಕೆಯಿಂದ ಒದಗುವಂತಹ ಲಕ್ವ(ಸ್ಟ್ರೋಕ್) ರೋಗಗಳಿಗೆ ಇದೇ ಉತ್ತಮ ಪರಿಹಾರವಾಗಬಹುದು. 'ಮೊದಮೊದಲಿಗೆ ಇದೆಲ್ಲಾ ಕೇಳಿದರೆ ತಮಾಷೆಯಂತೆ ಕಂಡರೂ ಇದು ಸಾಧ್ಯವಿದೆ! ಎಂದಾದರೆ ಏಕಾಗಬಾರದು? ನನಗಂತೂ ಇದರಲ್ಲಿ ಬೃಹತ್ ಸಾಮರ್ಥ್ಯ ಕಾಣುತ್ತಿದೆ' ಎನ್ನುತ್ತಾರೆ ನರಜೀವ ವಿಜ್ಞಾನಿ ಸೂಸನ್. ಆದರೆ ಸ್ವಾಕಾ ಎಂದು ಕರೆಯಲ್ಪಡುವ ಇನ್ನೊಬ್ಬ ನರಜೀವ ವಿಜ್ಞಾನಿ ಒಂದು ಹೆಜ್ಜೆ ಮುಂದೆ ಹೋಗಿ, ಇಂತಹ ಸಂಶೋಧನೆ ಮುಂದೊಂದು ದಿನ ದೂರದ ಬಾಹ್ಯಾಕಾಶ ಯಾನಗಳಿಗೆ ತೆರಳುವ ಗಗನಯಾತ್ರಿಗಳ ಆಮ್ಲಜನಕ ಸಿಲಿಂಡರುಗಳ ಬದಲಿಗೆ ದೇಹದಲ್ಲಿಯೇ ಇವುಗಳನ್ನು ಅಳವಡಿಸಿದರೆ ಸಾಕು! ಎನ್ನುತ್ತಿದ್ದಾರೆ.

ಅದೆಲ್ಲಾ ಇರಲಿ, ಮೊದಲಿಗೆ ಈ ದೇಹದಲ್ಲಿ ಪಾಚಿ ಬೆಳೆಸುವ ಆಲೋಚನೆ ಹೇಗೆ ಹುಟ್ಟಿತು? ಎನ್ನುವ ಪ್ರಶ್ನೆಗೆ ಉತ್ತರ ಇಲ್ಲಿದೆ. ಸ್ವಾಕ್ರಾ, ಸೂಸನ್ ಮತ್ತು ಅವರ ಸಂಗಡಿಗರು ಕಪ್ಪೆಯ ತಲೆಯನ್ನು ದೇಹದಿಂದ ಪ್ರತ್ಯೇಕಿಸಿ ಅದರ ಮೆದುಳನ್ನು ಸಕ್ರಿಯವಾಗಿಡಲು ಆಮ್ಲಜನಕವನ್ನು ಹೊರಗಿನಿಂದ ಸಣ್ಣ ಕೊಳವೆಗಳ ಮೂಲಕ ನೀಡುತ್ತಿದ್ದರು. ಹೀಗೊಂದು ದಿನ ಸಸ್ಯಶಾಸ್ತ್ರಜ್ಞರ ಜೊತೆ ನಡೆದ ಸಂವಾದದಲ್ಲಿ ಅವರು ನೀಡಿದ ಸಲಹೆಯಂತೆ ಸ್ವಾಕ್ರಾರವರಿಗೆ ಪಾಚಿಯನ್ನು ಆಮ್ಲಜನಕದ ಪೂರೈಕೆಗೆ ಬಳಸುವ ಈ ಉಪಾಯ ಹೊಳೆಯಿತಂತೆ. ಆಗಲೇ ಕಪ್ಪೆ ಮರಿಗಳ ರಕ್ತನಾಳಗಳಿಗೆ ಹಸಿರು ಪಾಚಿ(ಕ್ಲಾಮೈಡೋಮನಾಸ್) ಅಥವಾ ಸಯನೋಬ್ಯಾಕ್ಟೀರಿಯಾ(ಸೈನೆಕೊಸ್ಯೆಟಿಸ್) ಅನ್ನು ಒಳನುಗ್ಗಿಸಿದರು. ಇವುಗಳು ಕಪ್ಪೆಮರಿಗಳ ಅರೆಪಾರದರ್ಶಕ ಚರ್ಮದಿಂದ ಒಳಬರುವ ಬೆಳಕನ್ನೇ ಉಪಯೋಗಿಸಿ ಆಮ್ಲಜನಕವನ್ನು ತಯಾರಿಸುತ್ತಿದ್ದವಂತೆ. ಇವುಗಳಿಂದ ಬರುತ್ತಿರುವ ಆಮ್ಲಜನಕ ನಿಜವಾಗಿಯೂ ಉಪಯೋಗವಾಗುವುದೇ ಎಂದು ತಿಳಿಯಲು ಇವರು ನಡೆಸಿದ ಪ್ರಯೋಗ ಇಂತಿದೆ.



ಮೊದಲಿಗೆ ಕಪ್ಪೆಯ ಮೆದುಳಿನಲ್ಲಿನ ಒಂದು ಭಾಗದಲ್ಲಿ ಸರಬರಾಜಾಗುತ್ತಿದ್ದ ಆಮ್ಲಜನಕವನ್ನು ತೆಗೆದರು. ಅದರ ಪರಿಣಾಮವಾಗಿ ಕಪ್ಪೆಯ ಕಣ್ಣಿನ ನರ ಜೀವಕೋಶಗಳು ಸಿಗ್ನಲ್ ಕಳಿಸುವುದನ್ನು ನಿಲ್ಲಿಸಿದವು. ಇದಾದ ಬಳಿಕ ಆ ರಕ್ತನಾಳಗಳಲ್ಲಿದ್ದ ಪಾಚಿಗೆ ಬೆಳಕನ್ನು ನೀಡಲಾಯಿತು. ಅವರ ಆಶ್ಚರ್ಯಕ್ಕೆ ಕೆಲವೇ ಸಮಯದಲ್ಲಿ ಮತ್ತೆ ಆ ಕಣ್ಣಿನ ನರ ಜೀವಕೋಶಗಳಲ್ಲಿ ಸಿಗ್ನಲ್ ರವಾನೆ ಶುರುವಾಯಿತು.

ಇಷ್ಟಾದ ಬಳಿಕ ಪ್ರಯೋಗ ಯಶಸ್ವಿಯಾಗಿ ಇದನ್ನು ತಕ್ಷಣವೇ ರೂಢಿಗೆ ತರಲಾಗದು. ಏಕೆಂದರೆ ಇನ್ನೂ ಈ ಪಾಚಿ ರಕ್ತನಾಳಗಳಲ್ಲಿ ಎಷ್ಟು ಸಮಯದ ಕಾಲ ಉಳಿಯುತ್ತವೆ, ನಮ್ಮ ದೇಹವೂ ಸಹ ಹಿಂದೆಂದೂ ಇಲ್ಲದ ಇಂತದೇ ಹೊಸ ಅತಿಥಿಯನ್ನು ಹೇಗೆ ಒಪ್ಪುತ್ತದೆ ಎಂದು ಸ್ಪಷ್ಟವಾಗಿ ತಿಳಿಯದು. ‘ಈ ಸಂಶೋಧನೆಯು ನಿತ್ಯಜೀವನದಲ್ಲಿ ಸಧ್ಯಕ್ಕೆ ಬಳಸುವುದಂತೂ ಸುಳ್ಳು. ಆದರೆ ಇಂತಹ ಅಸಾಂಪ್ರದಾಯಿಕ ರೀತಿಯ ಸಂಶೋಧನೆಗಳಿಂದ ಲಕ್ವಗಳಂತಹ ಖಾಯಿಲೆಗಳಿಗೆ ಮುಂದೊಂದು ದಿನ ಸುಲಭ ಪರಿಹಾರ ಸಿಗಬಹುದು’ ಎನ್ನುತ್ತಾರೆ ನರವಿಜ್ಞಾನಿ ಕ್ಯಾತ್ಲೀನ್.

ಆದರೆ ಇಂತಹ ಮಾತುಗಳು ಸ್ವ್ಯಾಕಾ ಮತ್ತು ಉಳಿದ ಸಂಶೋಧಕರಿಗೆ ಧೃತಿಗೆಡಿಸಲಿಲ್ಲ. ಅವರ ಮಾತುಗಳಲ್ಲಿ ಹೇಳುವುದಾದರೆ, "ಈ ಸಂಶೋಧನೆಯ ಮುಂದಿನ ಹಂತದಲ್ಲಿ ಬಹುಶಃ ಗ್ಲೂಕೋಸ್ ಕಡಿಮೆ ಇರುವ ಜೀವಕೋಶಗಳಿಗೆ ಇದರಿಂದಲೇ ಅದನ್ನೂ ಪೂರೈಸಬಹುದು" ಎನ್ನುತ್ತಾರೆ. ನನ್ನ ಪ್ರಕಾರ ಇಂತಹ ಸಕಾರಾತ್ಮಕ ಯೋಚನೆಗಳೇ ಬೆಳವಣಿಗೆ ಹಾಗು ಅಸಾಧ್ಯವೆನಿಸುವ ಸಾಧನೆಗಳ ಮೊದಲ ಮೆಟ್ಟಿಲುಗಳು. ನಿಮ್ಮ ಪ್ರಕಾರ......?

ನಿಮ್ಮ ಪ್ರಕಾರಗಳ ನಮಗೆ ಬರೆದು ತಿಳಿಸಿ:- kaanana.mag@gmail.com

ಮೂಲ ಲೇಖನ: ScienceNews*for*Students



- ಜೈ ಕುಮಾರ್ .ಆರ್

ಡಬ್ಲ್ಯೂ.ಸಿ.ಜಿ., ಬೆಂಗಳೂರು.

# ರೌದ್ರ ನರ್ತನ

ಮಳೆಯೇ ನಿಲ್ಲಲಿ ನಿನ್ನ ರೌದ್ರನರ್ತನ

ತಲ್ಲಣಿಸಿಹುದು ಭೂಮಿಯು

ಯಾಕೆ ನಿನಗಿಷ್ಟು ಕೋಪ ತಾಪ

ಸಹಿಸಿಕೊಳ್ಳಲಾರರು ಮನುಜರು

ಎಲ್ಲಿ ನೋಡಿದರೂ ನಿನ್ನದೇ ಅಬ್ಬರ

ಯಾಕೆ ನೀನಾದೆ ಇಷ್ಟೊಂದು ಕ್ರೂರ

ಎಲ್ಲೆಡೆ ಕೇಳುತಿಹುದು ಜನರ ಹಾಹಾಕಾರ

ಕಣ್ಣಾಲೆಗಳಲಿ ತುಂಬಿಹುದು ದುಃಖದ ಕಣ್ಣೀರ

ಜೀವಜಲವು ನೀನು

ಜೀವ ಕೊಲ್ಲುವ ರಕ್ಕಸನಾದರೆ ಹೇಗೆ?

ಕಂಗೆಟ್ಟ ಮನುಜನು

ತಿಳಿಯದಾದನು ನಿನ್ನಿಂದ ತಪ್ಪಿಸಿಕೊಳ್ಳುವ ಬಗೆ!

ವರುಣ ದೇವನೆ ಶಾಂತನಾಗು

ನಿನ್ನನೆ ಅವಲಂಬಿಸಿದ ಈ ಜಗಕೆ

ನಿಧಾನಿಸಿ ಧರೆಗೆ ಆಗಮಿಸು

ನಿನ್ನನೆ ದೇವರೆಂದು ಪೂಜಿಸುವ ಜನಕೆ

- ಜನಾರ್ದನ ಗೋರ್ಟೆ

# ಪ್ರಕೃತಿ ಬಿಂಬ



**ಆಸ್ಪ್ರೇ (Osprey):** © ವಿಜಯ್ ಕುಮಾರ್ ಡಿ. ಎಸ್.

ನದಿ ಹಾಗೂ ಕಡಲತೀರಗಳಲ್ಲಿ ಹೆಚ್ಚಾಗಿ ಕಂಡುಬರುವ ಈ ಡೇಗೆಯೂ 60 ಸೆಂಟಿಮೀಟರ್ ಉದ್ದವಿದ್ದು ಇವುಗಳ ರೆಕ್ಕೆಗಳು 160 ರಿಂದ 180 ಸೆಂಟಿಮೀಟರ್ ತಲುಪುತ್ತವೆ. ಎದೆಭಾಗ ಬೂದು ಬಣ್ಣದಿಂದ ಕೂಡಿರುತ್ತದೆ ಹಾಗೂ ಹಳದಿ ಬಣ್ಣದ ಮಧ್ಯೆ ಕಪ್ಪು ಚುಕ್ಕೆಯಂತೆ ಕಾಣುವ ಕಣ್ಣುಗಳನ್ನು ಹೊಂದಿದೆ. ಮೀನುಗಳು ಇದರ ಕಣ್ಣಿಗೆ ಸೆಳೆಯಲ್ಪಡುತ್ತವೆ ಎಂಬ ವದಂತಿಯು ರೋಮನ್ ಕಾದಂಬರಿಯಲ್ಲಿ ಇದೆ. 2 ಕೆ.ಜಿ ವರೆಗೆ ತೂಗುವ ಮೀನುಗಳನ್ನು ಸರಾಗವಾಗಿ ಹೊತ್ತೊಯ್ಯಬಲ್ಲ ಇದು ಸಂಪೂರ್ಣವಾಗಿ ಮೀನನ್ನು ಆಹಾರವಾಗಿ ಸೇವಿಸುತ್ತದೆ. ಸೆಪ್ಟೆಂಬರ್ ನಿಂದ ಅಕ್ಟೋಬರ್ ತಿಂಗಳಲ್ಲಿ ಸಂತಾನೋತ್ಪತ್ತಿ ನಡೆಸುವ ಇವು ಕೆಂಪು ಕಂದು ಬಣ್ಣದ ಸುಮಾರು 60 ಗ್ರಾಂ ತೂಕವಿರುವ ಮೊಟ್ಟೆಗಳನ್ನು 30 ರಿಂದ 35 ದಿನಗಳ ಕಾಲ ಕಾವುಕೊಟ್ಟು ಮರಿ ಮಾಡುತ್ತವೆ.



**ಬಾರ್ ಹೆಡೆಡ್ ಹೆಬ್ಬಾತು:** **© ವಿಜಯ್ ಕುಮಾರ್ ಡಿ. ಎಸ್.**

ಟಿಬೆಟ್, ಕಜಕಿಸ್ತಾನ್, ಮಂಗೋಲಿಯಾ ಹಾಗೂ ರಷ್ಯಾ ದೇಶಗಳಿಂದ ಹಿಮಾಲಯ ಪರ್ವತಗಳನ್ನು ದಾಟಿ ಭಾರತಕ್ಕೆ ವಲಸೆ ಬರುವ ಈ ಬಾತುಗಳು 2 ರಿಂದ 3 ಕೆಜಿ ತೂಕವಿದ್ದು ಸಾವಿರಾರು ಕಿಲೋಮೀಟರ್ ಹಾರಬಲ್ಲವು. ಪ್ರಪಂಚದಲ್ಲಿ ಅತಿ ಹೆಚ್ಚು ಹಾರುವ ಪಕ್ಷಗಳಲ್ಲಿ ಒಂದಾಗಿರುವ ಈ ಬಾರ್ ಹೆಡೆಡ್ ಹೆಬ್ಬಾತು ಪ್ರಪಂಚದ 5ನೇ ಅತಿ ಎತ್ತರದ ಪರ್ವತ ಹಾಗೂ ಮೌಂಟ್ ಎವರೆಸ್ಟ್ ಪರ್ವತಗಳನ್ನೂ ದಾಟಿ ಬರುತ್ತದೆ ಎಂಬ ವರದಿಗಳು ಇವೆ. ಆದರೆ ಇವುಗಳು 6550 ಮೀಟರ್ ಗಿಂತ ಎತ್ತರಕ್ಕೆ ಹಾರುವುದು ಇನ್ನು ಪತ್ತೆಯಾಗಿಲ್ಲ. ಈ ಹೆಬ್ಬಾತುಗಳು ಚಳಿ ಪ್ರದೇಶಗಳಲ್ಲಿ ನೆಲದ ಮೇಲೆ ಗೂಡುಮಾಡಿ 4 ರಿಂದ 5 ಮೊಟ್ಟೆಗಳನ್ನಿಟ್ಟು ಮರಿಮಾಡುತ್ತವೆ. ಉಳಿದ ಹೆಬ್ಬಾತುಗಳಿಗಿಂತ ತೂಕದಲ್ಲಿ ಸ್ವಲ್ಪ ಹೆಚ್ಚಿರುವುದರಿಂದ ರೆಕ್ಕೆಗಳು ಉದ್ದವಾಗಿವೆ ಹಾಗು ಇದು ಸರಾಗವಾಗಿ ಹಾರಲು ಉಪಯುಕ್ತವಾಗಿದೆ.



ಬೂದು ತಲೆ ಮೀನು ಗಿಡುಗ: © ವಿಜಯ್ ಕುಮಾರ್ ಡಿ. ಎಸ್.

ಬೂದು ತಲೆಯ ಮೀನು ಗಿಡುಗ: ಸಣ್ಣ ಕೊಕ್ಕು ಉದ್ದನೆಯ ಕುತ್ತಿಗೆಯ ಮೇಲೆ ಸಣ್ಣ ತಲೆ. ದುಂಡಾದ ಬಾಲ ಮತ್ತು ಚಿಕ್ಕದಾದ ಕಾಲುಗಳನ್ನು ಹೊಂದಿರುವ ಈ ಹದ್ದು 2 ರಿಂದ 3 ಕೆಜಿ ವರೆಗೆ ತೂಕವಿದ್ದು 60 ರಿಂದ 70 ಸೆಂಟೀಮೀಟರ್ ಉದ್ದವಿರುತ್ತದೆ. ವಯಸ್ಕ ಪಕ್ಷಿಯು ಬೂದು - ಕಂದು ಬಣ್ಣದಾಗಿದ್ದು ಮಸುಕಾದ ಬೂದು ತಲೆ ಹೊಂದಿರುತ್ತದೆ. ಈ ಹದ್ದುಗಳು ಸಮುದ್ರ1 ಮಟ್ಟದಿಂದ 1500 ಮೀಟರ್ ಎತ್ತರದ ತಗ್ಗು ಕಾಡುಗಳಲ್ಲಿ ವಾಸಿಸುತ್ತವೆ. ಇವು ನಿಧಾನವಾಗಿ ಚಲಿಸುವ ನದಿಗಳು, ತೊರೆಗಳು, ಸರೋವರಗಳು, ಕೆರೆಗಳು, ಜಲಾಶಯಗಳು ಮತ್ತು ಕರಾವಳಿಗಳಲ್ಲಿ ಕಂಡುಬರುತ್ತವೆ. ವಲಸೆ ಹೋಗದ ಪಕ್ಷಿ ಇದು ಆಗಿರುವುದರಿಂದ ಯಾವಾಗಲೂ ಒಂಟಿಯಾಗಿದ್ದು ಆಗಾಗ ಹುಡುಕುತ್ತ ಮತ್ತು ಸಂತಾನೋತ್ಪತ್ತಿ ಸಮಯದಲ್ಲಿ ಸಂಗಾತಿ ಪಕ್ಷಿಯನ್ನು ಹುಡುಕುತ್ತ ಹೊರಡುತ್ತವೆ. 2 - 4 ಮೊಟ್ಟೆಗಳನ್ನಿಟ್ಟು 40 - 45 ದಿನಗಳ ಕಾಲ ಕಾವು ಕೊಡುತ್ತವೆ.



ಗರುಡ: © ವಿಜಯ್ ಕುಮಾರ್ ಡಿ. ಎಸ್.

ಸತ್ತ ಮೀನುಗಳು ಹಾಗೂ ಇತರ ಬೇಟೆಗಳನ್ನು ತಿನ್ನುತ್ತ ಸಮುದ್ರ ತೀರದಲ್ಲಿ ನದಿ ದಂಡೆಗಳಲ್ಲಿ ಕಂಡುಬರುವ ಈ ಗರುಡವು ತಲೆ ಸೇರಿದಂತೆ ಎದೆಭಾಗವು ಬಿಳಿಯಾಗಿದ್ದು ರೆಕ್ಕೆ ಹಾಗೂ ದೇಹವೆಲ್ಲ ಕೆಂಪು-ಕಂದು ಮಿಶ್ರಿತವಾಗಿರುತ್ತದೆ. ಇದರ ಸಂತಾನೋತ್ಪತ್ತಿ ಸಮಯ ದಕ್ಷಿಣ ಏಷ್ಯಾದಲ್ಲಿ ಡಿಸಂಬರ್ ನಿಂದ ಏಪ್ರಿಲ್ ತಿಂಗಳು. ಆ ಸಮಯದಲ್ಲಿ 2 ಕಡು ಬಿಳಿ ಬಣ್ಣದ ಮೊಟ್ಟೆಗಳನ್ನಿಟ್ಟು 25 - 28 ದಿನಗಳ ಕಾಲ ಕಾವುಕೊಡುತ್ತವೆ. ಇವುಗಳ ಎಳೆಯ ಪಕ್ಷಿಗಳು ಗಾಳಿಯಲ್ಲಿ ಬೇಟೆಯಾಡುವುದನ್ನು ಕಲಿಯಲು ಗಾಳಿಯಲ್ಲಿ ಎಲೆಯನ್ನು ಬಿಟ್ಟು ಅದನ್ನು ಗಾಳಿಯಲ್ಲಿ ಹಿಡಿಯಲು ಪ್ರಯತ್ನಿಸುತ್ತದೆ. ಕೆಲವು ಬಾರಿ ನೀರಿಗೆ ಇಳಿದು ಮೀನನ್ನು ಹಿಡಿಯಲು ಪ್ರಯತ್ನಿಸುತ್ತವೆ.

ಛಾಯಾಚಿತ್ರಗಳು : ವಿಜಯ್ ಕುಮಾರ್ ಡಿ. ಎಸ್.

ಲೇಖನ : ನಾಗೇಶ್ ಓ. ಎಸ್.

# ನೀವೂ ಕಾನನಕ್ಕೆ ಬರೆಯಬಹುದು



© ಧನರಾಜ್ ಎಮ್.

ವಿಶ್ವದಾದ್ಯಂತ ದೇಶಗಳು ಪರ್ವತಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಜಾಗೃತಿ ಮೂಡಿಸಲು ಡಿಸೆಂಬರ್ 04 ನೇ ತಾರೀಖಿನಂದು ಅಂತರಾಷ್ಟ್ರೀಯ ಪರ್ವತ ದಿನವನ್ನಾಗಿ ಆಚರಿಸುತ್ತವೆ. ಎಷ್ಟೋ ಜನರಿಗೆ ಪರ್ವತಗಳ ವಿಶೇಷತೆ ಏನಿದೆ ಅಂತ, ಅವುಗಳಿಗೆ ಇಡೀ ದಿನವನ್ನು ಏಕೆ ಮೀಸಲಿಡಬೇಕೆಂದು ಗೊಂದಲ ಸೃಷ್ಟಿಯಾಗುತ್ತದೆ.

ದೈತ್ಯಕಾರದ ಪರ್ವತಗಳ ಬಗ್ಗೆ ಹೇಳಲು ಬೇಕಾದಷ್ಟು ವಿಷಯಗಳಿವೆ. ಈ ದೈತ್ಯರು ಕೆಲವು ಅದ್ಭುತವಾದ ಭೂದೃಶ್ಯಗಳನ್ನು, ವೈವಿಧ್ಯಮಯ ಪರಿಸರ ವ್ಯವಸ್ಥೆಗಳನ್ನು, ವಿವಿಧ ಜಾತಿಯ ಪ್ರಾಣಿ ಸಂಕುಲಗಳನ್ನು ಹಾಗೂ ಬುಡಕಟ್ಟು ಸಮುದಾಯಗಳನ್ನು ಒಳಗೊಂಡಿದೆ.

ವಿಶ್ವದ ಮೇಲ್ಮೈಯ ಕಾಲು ಭಾಗಕ್ಕಿಂತಲೂ ಹೆಚ್ಚು ಆವರಿಸಿಕೊಂಡಿದೆ. ಪ್ರಪಂಚದಲ್ಲಿರುವ ಜನಸಂಖ್ಯೆಯ ಶೇಕಡ 12 ರಷ್ಟು ಪರ್ವತಗಳನ್ನು ತಮ್ಮ ಮನೆಯೆಂದು ಕರೆದಿದ್ದಾರೆ. ಇಲ್ಲಿ ವಾಸಿಸುವ ಜನರಿಗೆ ಆಹಾರವನ್ನು ಪೂರೈಸುತ್ತದೆ. ಹಾಗೂ ಪರ್ವತ ಬಳಿ ವಾಸಿಸುವ ಜನರಿಗೆ ಸಿಹಿ ನೀರನ್ನು ಪೂರೈಸುತ್ತದೆ. ಎಷ್ಟೊಂದು ನದಿಗಳ ಉಗಮ ಸ್ಥಾನವು ಹಾಗೂ ಜಾಗತಿಕ ಹವಾಮಾನದ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ. ಇಷ್ಟೊಂದು ಮಾನವ ಹಾಗೂ ಪ್ರಾಣಿ ಸಂಕುಲಕ್ಕೆ ಅನುಕೂವಾಗುವ ಪರ್ವತಗಳನ್ನು ನಾವು ಅಲಕ್ಷ್ಯಸುತ್ತೇವೆ.

ಅತಿಯಾದ ಗಣಿಗಾರಿಕೆಯಿಂದ, ಅರಣ್ಯನಾಶದಿಂದ, ಕೃಷಿ ಭೂಮಿಯಿಂದ ಹಾಗೂ ಅಭಿವೃದ್ಧಿ ಎಂಬ ಹೆಸರಿನಲ್ಲಿ ಮೂಡುತ್ತಿರುವ ಚಟುವಟಿಕೆ ಗಳಿಂದ ಈ ಪರ್ವತಗಳು ಕರಗುತ್ತಿವೆ. ಈ ಪರ್ವತಗಳು ಬಗೆ ಬಗೆಯ ಜೀವ ತಾಣವಾಗಿರುವುದರಿಂದ ಅದನ್ನು ನಾವು ಕಡೆಗಣಿಸಬಾರದು ಈ ಅರಿವನ್ನು ಜನರಿಗೆ ಮೂಡಿಸಲು ಪರ್ವತ ದಿನವೆಂದು ಆಚರಿಸುತ್ತಾರೆ.

ಈ ಜನವರಿ ತಿಂಗಳ ಸಂಚಿಕೆಗೆ ಜೀವ ವೈವಿಧ್ಯತೆ ಕುರಿತ, ಕಾಡು, ಕಾಡಿನ ಕತೆಗಳು, ಜೀವ ವಿಜ್ಞಾನ, ವನ್ಯ ವಿಜ್ಞಾನ, ಕೀಟಲೋಕ, ಕೃಷಿ, ವನ್ಯಜೀವಿ ಛಾಯಚಿತ್ರಗಳು, ಕವನ (ಪರಿಸರಕ್ಕೆ ಸಂಬಂಧಿಸಿದ), ವರ್ಣಚಿತ್ರಗಳು ಮತ್ತು ಪ್ರವಾಸ ಕತೆಗಳು, ಪರಿಸರಕ್ಕೆ ಸಂಬಂಧ ಪಟ್ಟ ಎಲ್ಲಾ ಲೇಖನಗಳನ್ನು ಆಹ್ವಾನಿಸಲಾಗಿದೆ. ಇ-ಮೇಲ್ ಅಥವಾ ಪೋಸ್ಟ್ ಮೂಲಕ ಕಳಿಸಬಹುದು.

**ಈ ಕೆಳಗಿನ ಇ-ವಿಳಾಸಕ್ಕೆ ಲೇಖನಗಳನ್ನು ಇದೆ ನವಂಬರ್ ತಿಂಗಳ ದಿನಾಂಕ 20 ರೊಳಗೆ ನಿಮ್ಮ ಹೆಸರು ಮತ್ತು ವಿಳಾಸದೊಂದಿಗೆ**

kaanana.mag@gmail.com

ಅಥವಾ Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.

# *ಕಾನನಕ್ಕೆ ಹತ್ತು ವರ್ಷ*



ನಲ್ಮೆಯ ಕಾನನ ಓದುಗರೇ,

ನಿಮ್ಮೆಲ್ಲರ ಸಹಕಾರದಿಂದ , ಪರಿಸರ, ವನ್ಯಜೀವ,ವಿಜ್ಞಾನಕ್ಕೆ ಸಂಬಂದಿಸಿದ ಮಾಹಿತಿಯು ನಮ್ಮ ಕರುನಾಡ ಜನರಿಗೆ ಒದಗಿಸಬೇಕು ಎಂಬ ಆಶಯದಿಂದ 2010 ರಂದು ಶುರುವಾದ ಕಾನನ ಇ-ಮಾಸ ಪತ್ರಿಕೆಯು ಯಶಸ್ವಿಗಾಗಿ ಒಂಬತ್ತು ವರುಷಗಳನ್ನು ಪೂರೈಸಿ ಹತ್ತನೇ ವರ್ಷಕ್ಕೆ ಕಾಲಿಡುತ್ತಿದೆ. ಹತ್ತು ಹಲವು ಪ್ರಖ್ಯಾತ ಲೇಖಕರು, ವನ್ಯಜೀವಿ ಛಾಯಾಚಿತ್ರಕರು, ಕವಿಗಳು ತಮ್ಮ ಲೇಖನಗಳನ್ನು, ಛಾಯಾ ಚಿತ್ರಗಳನ್ನು,ಕವನಗಳನ್ನು ಯಾವುದೇ ಆಪೇಕ್ಷೆ ಇಲ್ಲದೆ ನಮ್ಮ ಮಾಸಿಕಕ್ಕೆ ನೀಡಿದ್ದಾರೆ ಹಾಗೂ ನೀಡುತ್ತಿದ್ದಾರೆ.

ಈ ಹತ್ತನೇ ಮಾಸಿಕದ ಯಶಸ್ವಿಗೆ ಕಾರಣರಾದ ಎಲ್ಲಾ ಲೇಖಕರನ್ನು , ಕವಿಗಳನ್ನು ಹಾಗೂ ಛಾಯಾಚಿತ್ರಕರನ್ನು ಒಂದೆಡೆ ಸೇರಿಸಿ ಅವರ ಪ್ರೋತ್ಸಾಹಕ್ಕೆ ಧನ್ಯವಾದಗಳನ್ನು ಸಲ್ಲಿಸಬೇಕೆಂದು ಹಾಗೆಯೇ ಮುಂದಿನ ಕಾನನ ನಡುಗೆಗೆ ಸಲಹೆ ಸೂಚನೆಗಳನ್ನು ಪಡೆಯಬೇಕೆಂಬ ಉದ್ದೇಶದಿಂದ ಕಾನನ ತಂಡವು ಜನವರಿ ತಿಂಗಳಲ್ಲಿ ಒಂದು ಸಣ್ಣ ಕಾರ್ಯಕ್ರಮವನ್ನ ಹಮ್ಮಿಕೊಳ್ಳಲು ತೀರ್ಮಾನಿಸಿದೆ. ಈ ಕಾರ್ಯಕ್ರಮವನ್ನು ಆಯೋಜಿಸಲು ಕಾನನ ತಂಡಕ್ಕೆ ಧನಸಹಾಯ ಬೇಕಿದ್ದು , ಧನಸಹಾಯ ಮಾಡಲು ಇಚ್ಚಿಸುವವರು ಹೆಚ್ಚಿನ ಮಾಹಿತಿಗೆ ಕಾನನಕ್ಕೆ ಇ-ಮೇಲ್ ಮಾಡಬಹುದು ಅಥವಾ ಕೆಳಗೆ ನೀಡಿರುವ ದೂರವಾಣಿ ಸಂಖ್ಯೆಗಳಿಗೆ ಸಂಪರ್ಕಿಸಬಹುದು.

ದೂರವಾಣಿ ಸಂಖ್ಯೆ: ನಾಗೇಶ್ ಓ. ಎಸ್. ( 9620223223 / 9008261066 )

ಮಹದೇವ ಕೆ. ಸಿ. ( 8722763596 )

